ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತಮೂರನೆಯ ಅಧಿವೇಶನ
ಶುಕ್ರವಾರ, ದಿನಾಂಕ : 29 ನೇ ಜನವರಿ, 2021

ರಾಜ್ಯದಲ್ಲಿರುವ ಹಿರಿಯ ನಾಗರಿಕರ ಮತ್ತು ತಂದೆ ತಾಯಿಯರ ಪಾಲನೆ ಕುರಿತು

ಶ್ರೀ ಪಿ. ಆರ್. ರಮೇಶ್(ನಾಮನಿರ್ದೇಶನ ಹೊಂದಿದವರು) -

36 (29) ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ -

(ಅ) ರಾಜ್ಯದಲ್ಲಿರುವ ಹಿರಿಯ ನಾಗರಿಕರ ಮತ್ತು ತಂದೆ ತಾಯಿಯವರ ಪಾಲನೆ-ಪೋಷಣೆ ಮತ್ತು ಕಲ್ಯಾಣ ಅಧಿನಿಯಮ 2007 ರ ಅನ್ವಯ ವೃದ್ಧಾಶ್ರಮಗಳ ನಿರ್ವಹಣೆಗೆ ಯಾವುದಾದರೂ ಕಾರ್ಯ ಯೋಜನೆ ರೂಪಿಸಲಾಗಿದೆಯೇ; (ಸಂಪೂರ್ಣ ವಿವರ ನೀಡುವುದು)

(ಆ) ರಾಜ್ಯದಲ್ಲಿರುವ ವೃದ್ಧಾಶ್ರಮಗಳ ಸಂಖ್ಯೆ ಎಷ್ಟು; ಖಾಸಗಿ, ಸರ್ಕಾರಿ ಮತ್ತು ಸರ್ಕಾರಿ ಅನುದಾನಿತ ವೃದ್ಧಾಶ್ರಮಗಳ ಸಂಖ್ಯೆ ಎಷ್ಟು; (ಜಿಲ್ಲಾವಾರು ವಿವರ ನೀಡುವುದು)

(ಇ) ಸದರಿ ವೃದ್ಧಾಶ್ರಮಗಳ ಅಸಲಿ ಸ್ಥಿತಿಗತಿಗಳ ಕುರಿತು ವಾರ್ಷಿಕವಾರು 3rd Party ಅಥವಾ ಸರ್ಕಾರೇತರ ಸ್ವಯಂ ಸೇವಾ ಸಂಸ್ಥೆಯ ವತಿಯಿಂದ ಅಧ್ಯಯನ/ತಪಾಸಣೆ ನಡೆಸುವ ಕಾರ್ಯಕ್ರಮಗಳು ರೂಪಿಸಲ್ಪಟ್ಟಿವೆಯೇ ; (ವಿವರ ನೀಡುವುದು)

(ಈ) ಹಿರಿಯ ನಾಗರಿಕರ ಮತ್ತು ತಂದೆ-ತಾಯಿಯವರ ಪಾಲನೆ-ಪೋಷಣೆ ಮತ್ತು ಕಲ್ಯಾಣ ಅಧಿನಿಯಮ 2007ರ ಅನುಚ್ಛೇದ 19ರ ಅನ್ವಯ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ವೃದ್ಧಾಶ್ರಮಗಳನ್ನು ಸ್ಥಾಪಿಸಲಾಗಿದೆಯೇ; ಇಲ್ಲದಿದ್ದಲ್ಲಿ, ಕಾರಣಗಳೇನು? (ವಿವರ ನೀಡುವುದು)